# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1032 (757)
ಮಾನ್ಯ ಸದಸ್ಯರ ಹೆಸರು : ಶ್ರೀ ಆರ್.ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖಾ ಸಚಿವರು
ಉತ್ತರಿಸಬೇಕಾದ ದಿನಾಂಕ : 10-03-2021

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಎಷ್ಟು ಜನ ದೇವದಾಸಿಯರಿದ್ದಾರೆ; ಅವರಿಗೆ ಯಾವ ಯೋಜನೆಗಳನ್ನು ರೂಪಿಸಲಾಗಿದೆ; | • 1993-94 ಮತ್ತು 2007-08ನೇ ಸಾಲುಗಳಲ್ಲಿ ಕರ್ನಾಟಕದಲ್ಲಿ ಸಮೀಕ್ಷೆ ನಡೆಸಿದಾಗ ರಾಜ್ಯದ 14 ಜಿಲ್ಲೆಗಳಲ್ಲಿ ಒಟ್ಟು 46,660 ಮಾಜಿ ದೇವದಾಸಿ ಮಹಿಳೆಯರು ಗುರುತಿಸಲ್ಪಟ್ಟಿದ್ದಾರೆ.<br>• ಮಾಜಿ ದೇವದಾಸಿಯರ ಪುನರ್ವಸತಿಗಾಗಿ ಈ ಕೆಳಕಂಡ 3 ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>1. ದೇವದಾಸಿ ಪುನರ್ವಸತಿ ಯೋಜನೆ: ಆದಾಯ ಉತ್ಪನ್ನಕರ ಚಟುವಟಿಕೆಗಳನ್ನು ಕೈಗೊಳ್ಳಲು ಸಾಲ ಮತ್ತು ಸಹಾಯಧನ.<br>2. ಮಾಜಿ ದೇವದಾಸಿಯರಿಗೆ ಮಾಸಾಶನ ಯೋಜನೆ<br>3. ಮಾಜಿ ದೇವದಾಸಿ ಮಹಿಳೆಯರಿಗೆ ವಸತಿ ಯೋಜನೆ |
| ಆ | ಅವರ ಪುನರ್ವಸತಿಗೆ ಸರ್ಕಾರದಿಂದ ಕೈಗೊಳ್ಳಲಾದ ಕ್ರಮವೇನು; ಎಷ್ಟು ಜನರಿಗೆ ಪುನರ್ವಸತಿ ಕಲ್ಪಿಸಲಾಗಿದೆ; (ಕಳೆದ 2 ವರ್ಷಗಳ ಮಾಹಿತಿ ನೀಡುವುದು) | **ಮಾಜಿ ದೇವದಾಸಿಯರ ಪುನರ್ವಸತಿಗಾಗಿ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ಮೂಲಕ ಈ ಕೆಳಕಂಡ ಯೋಜನೆಗಳನ್ನು ರೂಪಿಸಲಾಗಿದೆ.**<br><br>**1. ಮಾಜಿ ದೇವದಾಸಿ ಮಹಿಳೆಯರ ಪುನರ್ವಸತಿ ಯೋಜನೆ:-** ದೇವದಾಸಿ ಪದ್ಧತಿಯ ಸಮರ್ಪಣೆ ನಿಷೇಧಿಸಲು ಜನರಲ್ಲಿ ಜಾಗೃತಿ ಮೂಡಿಸಲು, ಜಾತ್ರಾ ಜಾಗೃತಿ, ಬೀದಿನಾಟಕ, ಕಾನೂನು ಶಿಬಿರ ಮತ್ತು ಆರೋಗ್ಯ ಶಿಬಿರಗಳನ್ನು ಹಮ್ಮಿಕೊಳ್ಳುವುದು.<br><br>ಮಾಜಿ ದೇವದಾಸಿಯರು ಆದಾಯ ಉತ್ಪನ್ನಕರ ಚಟುವಟಿಕೆ ಕೈಗೊಳ್ಳಲು ರೂ.50,000/- ಗಳ (ರೂ.25,000/-ಗಳ ಸಾಲ ಮತ್ತು ರೂ.25,000/-ಗಳ ಸಹಾಯಧನ) ಆರ್ಥಿಕ ಸೌಲಭ್ಯ ಒದಗಿಸಲಾಗುವುದು.<br><br>**2. ಮಾಜಿ ದೇವದಾಸಿಯರಿಗೆ ಮಾಸಾಶನ ಯೋಜನೆ:-** 45 ವರ್ಷ ಮೇಲ್ಪಟ್ಟ ಮಾಜಿ ದೇವದಾಸಿ ಮಹಿಳೆಯರಿಗೆ ರೂ.1,500/- ಗಳ ಮಾಸಿಕ ಮಾಸಾಶನವನ್ನು ನೀಡಲಾಗುವುದು.<br><br>**3. ಮಾಜಿ ದೇವದಾಸಿ ಮಹಿಳೆಯರಿಗೆ ವಸತಿ ಯೋಜನೆ:-** ನಿವೇಶನವುಳ್ಳ ವಸತಿ ರಹಿತ ಮಾಜಿ ದೇವದಾಸಿಯರಿಗೆ ಗ್ರಾಮೀಣ ಪ್ರದೇಶದಲ್ಲಿ ರೂ.1.80 ಲಕ್ಷಗಳಂತೆ ಹಾಗೂ ನಗರ ಪ್ರದೇಶದಲ್ಲಿ ರೂ.2.00 ಲಕ್ಷಗಳ ಘಟಕ ವೆಚ್ಚದಲ್ಲಿ ರಾಜೀವಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ಇವರ ಮೂಲಕ ವಸತಿ ಸೌಲಭ್ಯ ಕಲ್ಪಿಸಲಾಗುವುದು.<br><br>ಕಳೆದ 2 ವರ್ಷಗಳಲ್ಲಿ ಮಾಜಿ ದೇವದಾಸಿ ಮಹಿಳೆಯರಿಗೆ ಪುನರ್ವಸತಿ ಕಲ್ಪಿಸಿದ ವಿವರಗಳನ್ನು **ಅನುಬಂಧದಲ್ಲಿ** ಸಲ್ಲಿಸಲಾಗಿದೆ. |

| | | |
|---|---|---|
| ಇ | ಸಮಾಜ ಕಲ್ಯಾಣ ಇಲಾಖೆಯಿಂದ ಎಷ್ಟು ಜನ ದೇವದಾಸಿಯರಿಗೆ ಯಾವ ರೀತಿಯಲ್ಲಿ ಅನುಕೂಲಗಳನ್ನು ಕಲ್ಪಿಸಿ ಅವರ ಜೀವನಮಟ್ಟ ಸುಧಾರಿಸಲಾಗಿದೆ? | ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ದೇವದಾಸಿಯರಿಗೆ ಕೆಳಕಂಡ ಯೋಜನೆಗಳಡಿ ಅನುಕೂಲಗಳನ್ನು ಕಲ್ಪಿಸಿ ಕೊಡಲಾಗಿದೆ. |

ರೂ.ಲಕ್ಷಗಳಲ್ಲಿ

| ಕ್ರ ಸಂ | ಯೋಜನೆಗಳು | ಫಲಾನುಭವಿಗಳ ಸಂಖ್ಯೆ | ಸಹಾಯ ಧನ | ಬೀಜ ಧನ | ಒಟ್ಟು |
|---|---|---|---|---|---|
| 1 | ಸ್ವಯಂ ಉದ್ಯೋಗ ಯೋಜನೆ | 9224 | 346.34 | 11.00 | 357.34 |
| 2 | ಭೂ ಒಡೆತನ ಯೋಜನೆ | 1657 | 244.65 | 244.65 | 489.30 |
| 3 | ಗಂಗಾ ಕಲ್ಯಾಣ ಯೋಜನೆ | 58 | 29.37 | 0.00 | 29.37 |
| | ಒಟ್ಟು | 10939 | 620.36 | 255.65 | 876.01 |

ಸಂಖ್ಯೆ: ಮಮಇ/24/ಮಅನಿ/2021

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

# ಅನುಬಂಧ

| ಜಿಲ್ಲೆ | ವರ್ಷ :2018–19 | | | ವರ್ಷ :2019–20 | | |
|---|---|---|---|---|---|---|
| | ಆದಾಯ ಉತ್ಪನ್ನಕರ ಚಟುವಟಿಕೆ | ಮಾಶಾಸನ (ಪ್ರತಿ ಮಾಸಿಕ) | ವಸತಿ | ಆದಾಯ ಉತ್ಪನ್ನಕರ ಚಟುವಟಿಕೆ | ಮಾಶಾಸನ (ಪ್ರತಿ ಮಾಸಿಕ) | ವಸತಿ |
| ರಾಯಚೂರು | 40 | 2837 | 69 | 214 | 2861 | 67 |
| ಕೊಪ್ಪಳ | 125 | 2961 | 100 | 50 | 2976 | 149 |
| ಕಲ್ಬುರ್ಗಿ | 7 | 952 | 87 | 7 | 928 | 1 |
| ಯಾದಗಿರಿ | 9 | 852 | 52 | 24 | 789 | 3 |
| ಬಳ್ಳಾರಿ | 510 | 7940 | 118 | 261 | 8668 | 103 |
| ಬೆಳಗಾವಿ | 13 | 3182 | 61 | 239 | 3078 | 3 |
| ಬಾಗಲಕೋಟೆ | 226 | 4726 | 49 | 627 | 4816 | 80 |
| ಚಿತ್ರದುರ್ಗ | 1 | 222 | 16 | 16 | 222 | 16 |
| ಧಾರವಾಡ | 0 | 451 | 0 | 19 | 441 | 0 |
| ದಾವಣಗೆರೆ | 102 | 991 | 0 | 64 | 981 | 0 |
| ಗದಗ | 5 | 989 | 10 | 80 | 924 | 0 |
| ಹಾವೇರಿ | 4 | 518 | 0 | 47 | 506 | 0 |
| ಶಿವಮೊಗ್ಗ | 0 | 20 | 0 | 0 | 19 | 0 |
| ವಿಜಯಪುರ | 76 | 2386 | 102 | 226 | 2467 | 66 |
| **ಒಟ್ಟು** | **1118** | **29027** | **664** | **1874** | **29676** | **488** |

********